ನಿಮ್ಮ ಹಿತ್ತಲಲ್ಲಿನ ಜೀವ ಜಗತ್ತು

# ಜೇಡಗಳ ಕೆಲವು ವಿಚಿತ್ರ ಅಭ್ಯಾಸಗಳು...

ಹಲವಾರು ವರ್ಷಗಳಿಂದ ನಾವು ನೋಡಿರುವ ಅನೇಕ ವಿಚಿತ್ರ ಜೇಡಗಳಲ್ಲಿ ಕೆಲವು ಇಲ್ಲಿವೆ. ನೀವು ಇವುಗಳಲ್ಲಿ ಯಾವುದನ್ನಾದರೂ ಕಂಡಿದ್ದೀರಾ?

ವೀಣಾ ಕಝೂರ್ ಮತ್ತು ದಿವ್ಯ ಉಮ

## 1. ಒಂದು ಉಗುಳುವ ಜೇಡ:

ಹೆಸರೇ ಹೇಳುವಂತೆ ಈ ಚಿಕ್ಕ ಮತ್ತು ದುಂಡಗಿನ ಜೇಡ ಒಂದು ಅಂಟು ಪದಾರ್ಥವನ್ನು ಬಾಯಿಯಿಂದ ಉಗುಳಿ ತನ್ನ ಬೇಟೆಯನ್ನು ದಿಗ್ಭ್ರಮೆಗೊಳಿಸಿ ಸೆರೆ ಹಿಡಿಯುತ್ತದೆ. ಒಮ್ಮೆ ಆಘಾತಗೊಳಿಸಿ ಅಂಟಿನಂತಹ ಪದಾರ್ಥದಿಂದ ಸೆರೆಹಿಡಿದ ಮೇಲೆ ಜೇಡ ಅದರ ಹತ್ತಿರ ಹೋಗುತ್ತದೆ. ಅದಕ್ಕೆ ವಿಷವನ್ನು ಚುಚ್ಚಿ ಶೀಘ್ರವಾಗಿ ಅದರ ಸುತ್ತಲೂ ರೇಷ್ಮೆಯನ್ನು ಸುತ್ತಿ ನಿಧಾನವಾಗಿ ಭಕ್ಷಿಸುತ್ತದೆ.



**ಒಂದು ಉಗುಳುವ ಜೇಡ**
ಕೃಪೆ: Carlos De Soto Molinari, Wikimedia Commons. URL: https: //www.flickr.com/photos/cdesoto/142 36928148. License CC-BY-NC-ND.

## 2. ಬಲೆ ಬೀಸುವ ಜೇಡ:

ಹೆಸರಿನಿಂದ ನೀವು ಊಹಿಸಬಹುದಾದಂತೆ ಈ ಜೇಡವು ನಿಶಾಚರಿ (ರಾತ್ರಿ ಚಟುವಟಿಕೆಯಿಂದಿರುವ) ಯಾಗಿದ್ದು ಒಂದು ಚಿಕ್ಕ ಬಲೆಯನ್ನು ಹೊಂದಿರುತ್ತದೆ. ಈ ಬಲೆಯನ್ನು ಅದು ತನ್ನ ಮೊದಲ ಎರಡು ಜೊತೆ ಕಾಲುಗಳಿಂದ ಜೋತಾಡಿಸುತ್ತದೆ. ಯಾವುದಾದರೂ ಅಮಾಯಕ ಕೀಟ ಹತ್ತಿರ ಬಂದರೆ, ಜೇಡ ತನ್ನ ಬಲೆಯನ್ನು ಅದರ ಮೇಲೆ ಹಾಕಿ ಅದನ್ನು ಸಿಕ್ಕಿಸುತ್ತದೆ.



**ಒಂದು ಬಲೆ ಬೀಸುವ ಜೇಡ**
ಕೃಪೆ: Geoff Gallice, Wikimedia Commons. URL:https://upload.wikimedia.org/wikipedia/commons/d/ d6/Flickr_-_ggallice_-_Net-casting_spider_%283%29.jpg?uselang=en-gb. License: CC-BY.

## 3. ಚೇಳು ಜೇಡ:

ಇದರ ಉದ್ದನೆಯ ಹೊಟ್ಟೆ ಮತ್ತು ತನ್ನ ಆರ್ಬ್–ಬಲೆಯಲ್ಲಿ ನಿಂತಿರುವ ನಿಲುವಿನಿಂದ ಈ ಜೇಡವನ್ನು ಪತ್ತೆಹಚ್ಚಲು ಎರಡೆರಡು ಬಾರಿ ನೋಡಬೇಕು! ಇಷ್ಟು ಗೊಂದಲ ಸಾಲದು ಎಂಬಂತೆ ಈ ಜಾತಿಯ ಕಂದುಬಣ್ಣದ ಜೇಡ ಒಂದು ಒಣಗಿದ ಎಲೆಯಂತಿರುತ್ತದೆ!



**ಒಂದು ಚೇಳು ಜೇಡ**
ಕೃಪೆ: Sara. License: Commissioned and copyright image used with permission.

## 4. ಪಕ್ಷಿ – ಹಿಕ್ಕೆಯ ಜೇಡ:

ಈ ಜೇಡಕ್ಕೆ ಇಂತಹ ಆಶ್ಚರ್ಯಕರ ಹೆಸರು ಕೊಡುವುದಕ್ಕೆ ಒಂದು ಕಾರಣ ಇದೆ. ಇದರ ಬೇಟೆಯಾಡುವ ವಿಧಾನಗಳಲ್ಲಿ ಆಗ ತಾನೆ ಹಾಕಿದ ಪಕ್ಷಿಯ ಹಿಕ್ಕೆಯಂತೆ ಕಾಣುವುದೂ ಒಂದು. ಸಂಶೋಧನೆಯ ಪ್ರಕಾರ ಇದರಿಂದ ಪಕ್ಷಿಗಳಿಗೆ (ಇದರ ಮುಖ್ಯ ಭಕ್ಷಕಗಳು) ಈ ಜೇಡಗಳನ್ನು ಕಂಡುಹಿಡಿಯಲು ಆಗುವುದಿಲ್ಲ. ಪಕ್ಷಿ ಹಿಕ್ಕೆಯಲ್ಲಿರುವ ತಮಗೆ ಬೇಕಾಗಿರುವ ಪೋಷಕಾಂಶಗಳನ್ನು ಹೀರಲು ಬರುವ ಚಿಟ್ಟೆಗಳು ಮೋಸಹೋಗಿ ಈ ಜೇಡಗಳಿಗೆ ಆಹಾರವಾಗಬಹುದು!



**ಒಂದು ಪಕ್ಷಿ ಹಿಕ್ಕೆಯ ಜೇಡ**
ಕೃಪೆ: Peter Woodard, Wikimedia Commons.URL:https://commons.wikimedia.org/wiki/File:Bird_dropping_spider_Chatswood_West.JPG. License: CC-BY-SA.

## 5. ಎಂಟು ಕಾಲುಗಳುಳ್ಳ ಇರುವೆಯೇ?

ಸುಮಾರು 12 ಕುಟುಂಬಗಳಿಗೆ ಸೇರಿದ ಜೇಡಗಳು ತಮ್ಮ ಬಾಹ್ಯ ತೋರಿಕೆಯಲ್ಲಿ ಮತ್ತು ನಡವಳಿಕೆಯಲ್ಲಿ ಇರುವೆಗಳನ್ನು ಅಣಕು ಮಾಡುತ್ತವೆ. ಇವುಗಳನ್ನು ಇರುವೆ– ಅಣಕು–ಜೇಡಗಳು ಎಂದು ಕರೆಯಲಾಗುತ್ತದೆ. ಅನೇಕ ಬಾರಿ ಇವು ತಾವು ಅಣಕು ಮಾಡುವ ಇರುವೆಯ ವಾಸಸ್ಥಳದ ಹತ್ತಿರವೇ ಇರುತ್ತವೆ. ಏಕೆ ಕೆಲವು ಜೇಡಗಳು ಇರುವೆಗಳನ್ನು ಅಣಕು ಮಾಡುತ್ತವೆ? ಸಂಶೋಧನೆಗಳಿಂದ ತಿಳಿದಿರುವುದು ಇರುವೆಗಳ ಭಕ್ಷಕರಾದ ಪಕ್ಷಿಗಳು, ಮ್ಯಾಂಟಿಡ್‌ಗಳು ಮತ್ತು ಕಣಜಗಳು, ಇರುವೆಗಳು ಆಕ್ರಮಣಕಾರಿ ಮತ್ತು ಬಾಯಿಗೆ ರುಚಿಸುವುದಿಲ್ಲ ಎಂದು ಅವುಗಳನ್ನು ಹಿಡಿಯುವುದನ್ನು ತಪ್ಪಿಸುತ್ತವೆ. ಒಂದು ಜೇಡ ಇರುವೆಯಂತೆ ಕಂಡರೆ ಅವನ್ನೂ ತಪ್ಪಿಸಿಬಿಡುತ್ತವೆ! ಕೆಲವು ಜೇಡಗಳು ಇರುವೆಗಳಂತೆ ಕಾಣುವುದಲ್ಲದೆ, ಇರುವೆಗಳಂತೆಯೇ ವಾಸನೆ ಹೊಂದಿರುತ್ತವೆ. ಅವು ಅಣಕು ಮಾಡುವ ಇರುವೆಯ ವಾಸನೆಯ ಫಿರೋಮೋನ್ (ವಾಸನೆ) ಅನ್ನು ಹೊರಹಾಕುತ್ತವೆ. ಹೀಗೆ ಮಾಡುವುದರಿಂದ ಈ ಜೇಡಗಳು ಇರುವೆಗಳ ಸಮುದಾಯದಲ್ಲಿ ಗೊಂದಲವುಂಟು ಮಾಡುತ್ತವೆ. ಉಳಿದಂತೆ ಭದ್ರ ರಕ್ಷಣೆ ಇರುವ ಇರುವೆಗಳನ್ನು ಅಥವಾ ಇರುವೆ ಮೊಟ್ಟೆಗಳನ್ನು ಬೇಟೆಯಾಡುತ್ತವೆ.



**ಒಂದು ಇರುವೆ– ಅಣಕು ಜೇಡ**
ಕೃಪೆ: Karthikeyan S. Licence: Copyright image used with permission.

Poster Design: Vidya Kamalesh

**ವೀಣಾ ಕಝೂರ್**ರವರು ನೇಚರ್ ಕನ್ಸರ್ವೇಶನ್ ಫೌಂಡೇಷನ್ ಬೆಂಗಳೂರು ಇಲ್ಲಿ ವೃತ್ತಿಯನ್ನು ಹೊಂದಿದ್ದಾರೆ. ಇವರಿಗೆ ವಿನ್ಯಾಸದಲ್ಲಿ ಪರಿಪೂರ್ಣವಾದ ಒಂದು ಟೆಂಟ್ ಜೇಡದ ಬಲೆಯನ್ನು ತೋರಿಸಿದಾಗಿನಿಂದ, ಈ ಜೀವಿಗಳಲ್ಲಿ ಆಸಕ್ತರಾಗಿದ್ದಾರೆ. ಅವರ ಅತ್ಯಂತ ಪ್ರೀತಿಯ ನೆನಪುಗಳು ಯಾವುವೆಂದರೆ ಜೇಡಗಳನ್ನು ಭಾರತದ ಪಶ್ಚಿಮ ಘಟ್ಟದ ದಟ್ಟ ಹಸಿರು ಕಾಡುಗಳಲ್ಲಿ ಅರಸಿ ದಾಖಲಿಸಿದ್ದು. ವೀಣಾ ಅವರನ್ನು vena@nef-india.org ನಲ್ಲಿ ಸಂಪರ್ಕಿಸಬಹುದು.

**ದಿವ್ಯಾ ಉಮಾ**ರವರು ಸ್ಕೂಲ್ ಆಫ್ ಲಿಬರಲ್ ಸ್ಟಡೀಸ್, ಅಜೀಂ ಪ್ರೇಮ್‌ಜಿ ಯೂನಿವರ್ಸಿಟಿ, ಬೆಂಗಳೂರು ಇಲ್ಲಿ ಕೆಲಸ ಮಾಡುತ್ತಿದ್ದಾರೆ. ಪದವಿ ವಿದ್ಯಾರ್ಥಿಗಳಿಗೆ ಜೀವವಿಜ್ಞಾನವನ್ನು ಬೋಧಿಸುತ್ತಾರೆ. ಪರಭಕ್ಷಕ ಜೇಡ ಮತ್ತು ಕೀಟಗಳಲ್ಲಿ ಬೇಟೆ–ಸಂವಹನ ಮತ್ತು ಅಣಕು ಮಾಡುವಿಕೆಯ ಬಗ್ಗೆ ಅಧ್ಯಯನ ಇವರ ಕೆಲಸ. ಇವರಿಗೆ ಜಿಗಿಯುವ ಜೇಡಗಳ ಬಗ್ಗೆ ವಿಶೇಷ ಅನುಕಂಪ. ದಿವ್ಯ ಅವರನ್ನು divya.uma@apu.edu.in ಇಲ್ಲಿ ಸಂಪರ್ಕಿಸಬಹುದು.

**ಅನುವಾದ**: ಎಸ್. ಸುಧಾ **ಪರಿಶೀಲನೆ**: ಚಂದ್ರಿಕಾ ವಿಜಯೇಂದ್ರ

ಐ ವಂಡರ್...
ಶಾಲಾ ವಿಜ್ಞಾನದ ಮರುಶೋಧನೆ

Azim Premji University